# ಜ್ಞಾನದ ಮಾರುಕಟ್ಟೆ

ನೀನು ಒಂದು ಸ್ಕೂಲನ್ನು ಪ್ರಾರಂಭಿಸು.
ಅಲ್ಲಿ ಜ್ಞಾನದ ಮಾರಾಟ ಮಾಡು.
ಅದಕ್ಕಾಗಿ ಫೀಜು ತಗೋ.
ದುಡ್ಡು ಗಳಿಸು.
ಆಮೇಲೆ ದುಡ್ಡೇ ದುಡ್ಡು!

ಓದು-ಬರೆ ಕಲಿಯಲು ಇಪ್ಪತ್ತು,
ಬಸ್ ಗಾಗಿ ಮೂವತ್ತು,
ಸಮವಸ್ತ್ರಗಳಿಗಾಗಿ ನಾಲವತ್ತು...
ಬಯಲಿನಲ್ಲಿಯ ಆಟಕ್ಕಾಗಿ ಬೇರೆ,
ಮೋಜಿನಾಟಕ್ಕಾಗಾಗಿ ಬೇರೆ,
ಶಾಲೆಯ ಟ್ರಿಪ್ ಗಳಿಗಾಗಿ ಅಷ್ಟಿಷ್ಟಲ್ಲ, ಸಾಕಷ್ಟು!

ಜನರ ಪಿಸುಮಾತಿಗೆ ಗಮನ ಕೊಡಬೇಡ.
ನಿನ್ನ 'ಕೆಲಸ' ಮುಂದುವರಿಯಲಿ.

ದುಡ್ಡು ಗಳಿಸು. ಗಳಿಸುತ್ತಲೇ ಇರು.
ಅದರಿಂದ ಮತ್ತೊಂದು ಸ್ಕೂಲ್ ತೆರೆ.
ಹೀಗೆನೆ ಸಂಪತ್ತನ್ನು ಶೇಖರಿಸುತ್ತಿರು.

ನೀನಿನ್ನು ತರುಣ.
ಇದೇ ಕೆಲಸ ಮುಂದೆವರಿಸು.
ಎಲ್ಲಿಯವರೆಗೆ ಚಿನಾಬ್-ಸತಲಜ್ ನದಿಗಳು ಹರಿಯುತ್ತಿರುವವೋ
ಅಲ್ಲಿಯವರೆಗೆ ಕಲಿಸುತ್ತಲೇ ಇರುವದು ಹಿತಕರ.

ಸಾಕಷ್ಟು ಓದು.
ಲೆಕ್ಕಪತ್ರಗಳ ಪುಸ್ತಕಗಳನ್ನು ಓದು.
ಟೆಲಿಫೋನ್ ಡಿರೆಕ್ಟರಿ ಓದು.
ಬ್ಯಾಂಕಿನ ಪಾಸಬುಕ್ ಓದು.
ವಧು-ವರರ ಜಾಹಿರಾತುಗಳನ್ನು ಓದು.

ಮತ್ತೇನನ್ನು ಓದಬೇಡ.
ಮೀರ್ ಮತ್ತು ಗಾಲಿಬ್ ಓದಬೇಡ.
ಇಕ್ಬಾಲ್ ಮತ್ತು ಫೈಜ್ ಓದಬೇಡ.
(ಇಬ್ನೆ-ಇನ್ಶ್ ಓದಲೇ ಬೇಡ.)
ಇಲ್ಲವಾದರೆ ನೀನು ಅವರ ಬಲೆಯಲ್ಲಿ ಸಿಕ್ಕಿ ಬೀಳುವಿ.
ಆ ಮೇಲೆ ಅದರ ಪರಿಣಾಮದ ಹೊಣೆ ಯಾರೂ ತೆಗೆದುಕೊಳ್ಳಲಾರರು.

-ಇಬ್ನೆ-ಇನ್ಶ್
ಅನುವಾದಃ ಪ್ರಭಾಕರ ನಾನಾವಟಿ

*(ಇಬ್ನೆ-ಇನ್ಶ್ (1927-1978) ಪಾಕಿಸ್ತಾನದ ಉರ್ದು ಕವಿ.*
*1970ರಲ್ಲಿ ಬರೆದ ಈ ಕವಿತೆ ಶಿಕ್ಷಣದ ವ್ಯಾಪಾರವನ್ನು ಖಂಡಿಸುತ್ತದೆ.)*